# ಬಾಂಬ್ ಮತ್ತು ಜನರಲ್

## ಉಮ್ಬರ್ಟೋ ಇಕೋ



ಒಂದಾನೊಂದು ಕಾಲದಲ್ಲಿ
ಒಂದು ಅಣು ಇತ್ತು.



ಮತ್ತು ಅದೇ ಕಾಲದಲ್ಲಿ ಬಂಗಾರದ ಜಡೆಪಟ್ಟಿಗಳಿಂದ ತುಂಬಿದ ಸಮವಸ್ತ್ರಗಳನ್ನು ಧರಿಸಿದ ಒಬ್ಬ ದುಷ್ಟ ಜನರಲ್ ಕೂಡ ಇದ್ದನು.



ಜಗತ್ತು ಅಣುಗಳಿಂದ ತುಂಬಿತ್ತು.

ಎಲ್ಲ ಸಜೀವ ಮತ್ತು ನಿರ್ಜೀವ ವಸ್ತುಗಳೆಲ್ಲ
ಆಣುಗಳಿಂದ  ಮಾಡಲ್ಪಟ್ಟಿದ್ದವು.

ಅಣುಗಳು ಒಂದುಗೂಡಿ
ಅಣುಗಳ ಸಮುಚ್ಚಯವಾಗುವವು.
ಆ ಮೇಲೆ ಅವೇ ನಾವು ಕಾಣುತ್ತಿರುವ
ವಸ್ತುಗಳಾಗುವವು.
ಅಣುಗಳೇ ನಮ್ಮ ತಾಯಂದಿರನ್ನು
ಮಾಡುವವು.
ಅಣುಗಳೇ ಹಾಲು-ಹಣ್ಣುಗಳನ್ನು ಮಾಡುವವು.
ಅಣುಗಳೇ ಮಹಿಳೆಯರನ್ನು ಮಾಡುವವು.
ಅಣುಗಳೇ ಗಾಳಿ-ಮಳೆಗಳನ್ನು ಮಾಡುವವು.
ಅಣುಗಳೇ ಬೆಂಕಿಯನ್ನು ಮಾಡುವವು.
ನಮ್ಮನ್ನೆಲ್ಲ ಅಣುಗಳೇ ಮಾಡುವವು.



ಅಣುಗಳು ಸಾಮರಸ್ಯದಿಂದ
ಹೊಂದಿಕೆಯಾದಾಗ ಎಲ್ಲವು ಸರಿಯಾಗಿ
ಕೆಲಸ ಮಾಡುವವು.
ಜೀವನವೆಲ್ಲ ಒಂದಕ್ಕೊಂದರ ಹೊಂದಿಕೆಗಳ
ಮೇಲೆ ಅವಲಂಬಿಸಿರುವದು.

ಆದರೆ ಒಂದು ಅಣು ತುಂಡಾದಾಗ ಅದು
ಇನ್ನೊಂದು ಅಣುವಿಗೆ ಪೆಟ್ಟು ಕೊಡುತ್ತದೆ.
ಅದು ಮತ್ತೊಂದಕ್ಕೆ, ಮತ್ತೊಂದು
ಉಳಿದವುಗಳಿಗೆ, ಹೀಗೆ ಮುಂದೆ ಮುಂದೆ....
ಪೆಟ್ಟು ಬೀಳುತ್ತ ಹೋದಾಗ ಭಯಾನಕವಾದ
ಸ್ಫೋಟವಾಗುತ್ತದೆ.

ಅದೇ ಅಟೋಮಿಕ್ ಮೃತ್ಯು.



ಮಾತ್ರ

ನಮ್ಮ ಈ ಅಣು ಬಹು ನೊಂದಿಕೊಟ್ಟಿತ್ತು. ಏಕೆಂದರೆ ಅದನ್ನು ಅಣುಬಾಂಬಿನ ಒಳಗೆ ಇಡಲಾಗಿತ್ತು.

ಉಳಿದ ಅಣುಗಳ ಜೊತೆ ಬಾಂಬನ್ನು ಎಸೆದು ಎಲ್ಲ ಅಣುಗಳನ್ನು ನಾಶಪಡಿಸಿ ಎಲ್ಲವನ್ನು ನಷ್ಟಗೊಳಿಸುವ ದಿನದ ದಾರಿ ಕಾಯುತ್ತ ಅದು ಕುಳಿತಿತ್ತು.



ವಾಸ್ತವಿಕವಾಗಿ

ತಮ್ಮ ಆಯುಷ್ಯವನ್ನೇ ಬಾಂಬುಗಳ ರಾಶಿ ಮಾಡುವ ಜನರಲ್ ಗಳಿಂದ ಈ ಜಗತ್ತು ತುಂಬಿದೆ.

ನಮ್ಮ ಈ ಜನರಲ್ ಕೂಡ ಉಪ್ಪರಿಗೆ ಕೋಣೆಯಲ್ಲಿ ಬಾಂಬುಗಳ ರಾಶಿಯನ್ನೇ ಇಟ್ಟಿದ್ದನು.

“ನಾನು ಇನ್ನಷ್ಟು ರಾಶಿಗಟ್ಟಲೇ ಬಾಂಬುಗಳನ್ನು ಕಲೆ ಹಾಕಿ ಒಂದು ಚೆಂದವಾದ ಯುದ್ಧ ಆರಂಭಿಸುವೆ! “ ಎಂದು ಹೇಳುತ್ತ ನಕ್ಕನು.

ಇಷ್ಟೆಲ್ಲ ಬಾಂಬುಗಳು ಅವನ ಕೈಗಳ ನಿಲುವಿನಲ್ಲಿದ್ದಾಗ ದುಷ್ಟತನದಿಂದ ದೂರವಿರುವದು ಸಾಧ್ಯವೇ?





ಬಾಂಬುಗಳಲ್ಲಿ ಸೆರೆಹಿಡಿದಿಟ್ಟ ಅಣುಗಳಿಗೆ
ನೆಮ್ಮದಿ ಇರಲಿಲ್ಲ.
ಅವುಗಳಿಂದಾಗಿಯೇ ಬಹು ದೊಡ್ಡ
ಅನಾಹುತವಾಗಲಿದೆ.
ಸಾವಿರಾರುಗಟ್ಟಲೇ ಮಕ್ಕಳು ಸಾಯುವವು.
ಸಾವಿರಾರುಗಟ್ಟಲೇ ಹೆಣ್ಮಕ್ಕಳು,
ಸಾವಿರಾರುಗಟ್ಟಲೇ ಚಿಕ್ಕ ಮರಿಗಳು,
ಸಾವಿರಾರುಗಟ್ಟಲೇ ದನ ಕರುಗಳು,
ಸಾವಿರಾರುಗಟ್ಟಲೇ ಪಶು-ಪಕ್ಷಿಗಳು-
ಪ್ರತಿಯೊಂದು...

ಕೆಂಪು ಹಂಚುಗಳ ಅಂದ ಚೆಂದದ ಮನೆಗಳಿದ್ದ,
ನಗರಕ್ಕೆ ನಗರವೇ ನಷ್ಟವಾಗುವದು.
ಸುತ್ತಮುತ್ತಲಿದ್ದ ಹಸಿರು ಗಿಡ-ಮರಗಳೆಲ್ಲ
ಕೂಡ.





ಆಮೇಲೆ

... ಬರಿ ಭಯಾನಕವಾದ
ಕಪ್ಪಾದ ದೊಡ್ಡ ತೆಗ್ಗು
ಬಿಟ್ಟರೆ ಏನೇನು
ಉಳಿಯಲಾರದು.



ಇದರಿಂದಾಗಿ
ಅಣುಗಳೆಲ್ಲ ಜನರಲ್ ನ
ವಿರುದ್ಧ ಹೋರಾಟ ಮಾಡಲು
ನಿರ್ಧರಿಸಿದವು.

ಒಂದು ರಾತ್ರಿ ಮೆಲ್ಲಗೆ ಸಪ್ಪಳ
ಮಾಡದೆ ಬಾಂಬುಗಳಿಂದ
ಹೊರಬಿದ್ದು ನೆಲಮಾಳಿಗೆಯಲ್ಲಿ
ಅಡಗಿಕೊಂಡವು.



ಮರು ದಿನ ಮುಂಜಾನೆ
ಜನರಲ್ ಮತ್ತು ಅವನ ಕೆಲ ಸಂಗಡಿಗರು
ಬಾಂಬುಗಳಿಟ್ಟ ಸ್ಥಳಕ್ಕೆ ಬಂದರು.

"ಈ ಬಾಂಬುಗಳನ್ನು ತಯಾರಿಸಲು ನಾವು
ರಾಶಿಗಟ್ಟಲೇ ಹಣವನ್ನು ಸುರಿದಿದ್ದೇವೆ.
ಅವುಗಳನ್ನು ಬರಿ ಪಡಿಯಚ್ಚು ಮಾಡಲು
ಇಡಬೇಕೇ? ನೀವೇಕೆ ಜನರಲ್ ಆಗಿದ್ದಿರಿ?"
ಎಂದು ಪ್ರಶ್ನಿಸಿದರು.

"ನೀವು ಹೇಳುವದು ಸರಿ ಮಾತು.
ನಾವು ಯುದ್ಧ ಆರಂಭಿಸಲೇ ಬೇಕು.
ಹಾಗೆ ಮಾಡದಿದ್ದರೆ ನನ್ನ ಜೀವನ ಯಾತ್ರೆ
ಮುಗಿದಂತೆಯೇ" ಎಂದು ಜನರಲ್
ಹೇಳಿದನು.



ಅವನು (ಅಣು) ಯುದ್ಧವನ್ನು
ಜಾಹೀರ ಪಡಿಸಿದನು.



ಅಣುಯುದ್ಧ ಆರಂಭಿಸಿದ ಸುದ್ದಿ ಎಲ್ಲಕಡೆ
ಹಬ್ಬಿದ ಕೂಡಲೆ ಜನರೆಲ್ಲ ಅಂಜಿ
ರೊಚ್ಚಿಗೆದ್ದು "ಈ ಜನರಲ್ ನಿಗೆ
ಬಾಂಬುಗಳನ್ನು ತಯಾರಿಸಲು ಅನುಮತಿ
ಕೊಡಬಾರದಾಗಿತ್ತು."
ಎಂದೆನ್ನತೊಡಗಿದರು,





ಆದರೆ ಈಗ ಎಲ್ಲ ಕೈಮೀರಿ ಹೋಗಿತ್ತು.



ಎಲ್ಲರೂ ನಗರ ಬಿಟ್ಟು ದಿಕ್ಕು ತಪ್ಪಿದ ಹಾಗೆ
ಹೋಗತೊಡಗಿದರು.

ಆದರೆ ಅವರಿಗೆ ಈಗ ಎಲ್ಲಿ ಸುರಕ್ಷಿತವಾದ
ಆಶ್ರಯ ದೊರೆಯಬಹುದು?





ಈ ನಡುವೆ ಜನರಲ್ ನು ಒಂದು
ವಿಮಾನದಲ್ಲಿ ಎಲ್ಲ
ಬಾಂಬುಗಳನ್ನಿಟ್ಟು
ನಗರಗಳ ಮೇಲೆ
ಒಂದೊಂದಾಗಿ
ಎಸೆಯತೊಡಗಿದನು.



ಆದರೆ ಬಾಂಬುಗಳು ಬಿದ್ದರೂ ಕೂಡ ಅವುಗಳ
ಸ್ಫೋಟವಾಗಲೇ ಇಲ್ಲ.
(ಏಕೆಂದರೆ ಅವುಗಳಲ್ಲಿ ಏನೇನು ಇರಲಿಲ್ಲ!)

ಮತ್ತು ಜನರೆಲ್ಲ ದುರಂತದಿಂದ
ಪಾರಾಗಿದ್ದರಿಂದ ಆನಂದಿತರಾದರು.
(ತಮ್ಮ ದೈವವನ್ನೇ ಅವರು ನಂಬಲಾರರು!)

ಕೆಳಗೆ ಬಿದ್ದ ಬಾಂಬಿನ ಪಾತ್ರೆಗಳಲ್ಲಿ
ಹೂವಿನಗಿಡಗಳನ್ನು ನೆಟ್ಟಿ
ಬೆಳೆಸತೊಡಗಿದರು.

"ಬಾಂಬುಗಳಿರದ ಈ ಜಗತ್ತು ಎಷ್ಟೊಂದು
ಸುಂದರವಾಗಿದೆ!" ಎಂಬುದನ್ನು ಅವರು
ಕಂಡುಹಿಡಿದರು.



ಇನ್ನು ಮುಂದೆ ಯುದ್ಧ ಮಾಡುವದಿಲ್ಲ
ಎಂದು ನಿರ್ಧರಿಸಿದರು.

ತಾಯಂದಿರಿಗೆ
ಸಮಾಧಾನವಾಯಿತು.
ತಂದೆಗಳಿಗೂ ಕೂಡ.

ಎಲ್ಲರಿಗೂ...



ಜನರಲ್ ನ ಪರಿಸ್ಥಿತಿ?
ಇನ್ನು ಮುಂದೆ ಯುದ್ಧಗಳು ಇಲ್ಲದಿದ್ದರಿಂದ ಜನರಲ್ ನನ್ನು ಕೆಲಸದಿಂದ ವಜಾ ಮಾಡಿದರು.
ಅವನ ಬಂಗಾರದ ಜಡೆಪಟ್ಟಿಗಳ ಸಮವಸ್ತ್ರಗಳನ್ನು ಉಪಯೋಗಿಸಲೆಂದು ಅವನನ್ನು ಹೋಟಲ್ಲಿನ ಮುಂದೆ ನಿಲ್ಲುವ ಕಾವಲುಗಾರನೆಂದು ನೇಮಿಸಿದರು.
ಎಲ್ಲರು ಶಾಂತಿಯುತವಾಗಿ ಜೀವಿಸುತ್ತಿದ್ದರಿಂದ ಸಾಕಷ್ಟು ಯಾತ್ರಿಗಳು ಹೋಟೆಲ್ಲಿಗೆ ಬರತೊಡಗಿದರು.
ಈ ಮೊದಲಿನ ಶತ್ರುಗಳು ಕೂಡ...
ಜನರಲ್ ನ ಕೈಕೆಳಗೆ ಕೆಲಸ ಮಾಡಿದ ಸೈನಿಕರು ಬಂದಾಗ ಈ ಜನರಲ್ ಗಾಜಿನ ಬಾಗಿಲು ತೆರೆದು ನಡವನ್ನು ಮಣಿಸಿ ಸಲಾಮು ಹೊಡೆಯತೊಡಗಿದನು.






ಸೈನಿಕರು ಹೊರಬೀಳುವಾಗ ಜನರಲ್
'ಸುಪ್ರಭಾತ'ವೆಂದು ಬೀಳ್ಕೊಟ್ಟಾಗ ಅವರೆಲ್ಲ ಅವನನ್ನು
ಗುರುತಿಸಿ ಅಸಡ್ಡೆಯಿಂದ "ಈ ಹೋಟೆಲ್ಲನಲ್ಲಿಯ ಸೇವೆ
ಸರಿಯಿಲ್ಲ." ಎಂದು ತೆಗಳುತ್ತಿದ್ದರು.

ಜನರಲ್ ಸಿಟ್ಟಿನಿಂದ ಕಿಡಿಕಿಡಿಯಾಗುತ್ತಿದ್ದನು.
ಆದರೆ ಏನೂ ಮಾಡಲು ಶಕ್ಯವಿರಲಿಲ್ಲ.

ಏಕೆಂದರೆ ಅವನೀಗ ಕಾಲುಕಸವಾಗಿದ್ದನು!

ಮುಕ್ತಾಯ

